# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲ ಪ್ರಶ್ನೆ ಸಂಖ್ಯೆ : 1015
ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಬಿ.ಜಿ. ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 21.09.2021
ಉತ್ತರಿಸುವವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಇಲಾಖಾ ಸಚಿವರು.

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಗಳಿಗೆ ಕಳೆದ ಮೂರು ವರ್ಷಗಳಲ್ಲಿ ವಿಕಲಚೇತನರ ಅಭಿವೃದ್ಧಿಗಾಗಿ ಸರ್ಕಾರ ನಿಗದಿಪಡಿಸಿ, ಬಿಡುಗಡೆ ಮಾಡಿದ ಅನುದಾನ ಎಷ್ಟು; (ವಿವರ ನೀಡುವುದು) | ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಗಳಿಗೆ ಕಳೆದ ಮೂರು ವರ್ಷಗಳಲ್ಲಿ ವಿಕಲಚೇತನರ ಅಭಿವೃದ್ಧಿಗಾಗಿ ಇಲಾಖಾ ವತಿಯಿಂದ ಬಿಡುಗಡೆಯಾದ ಅನುದಾನದ ವಿವರ ಈ ಕೆಳಕಂಡತಿಂದೆ. |

| ಕಲಬುರಗಿ ಜಿಲ್ಲೆ | | |
|---|---|---|
| ಕ್ರ.ಸಂ | ವರ್ಷ | ವಿವಿಧ ಯೋಜನೆಗಳಿಗೆ ಬಿಡುಗಡೆಯಾದ ಅನುದಾನ (ರೂ.ಲಕ್ಷಗಳಲ್ಲಿ) |
| 1. | 2018-19 | 343.02 |
| 2. | 2019-20 | 383.42 |
| 3. | 2020-21 | 393.40 |

| ಯಾದಗಿರಿ ಜಿಲ್ಲೆ | | |
|---|---|---|
| ಕ್ರ.ಸಂ | ವರ್ಷ | ವಿವಿಧ ಯೋಜನೆಗಳಿಗೆ ಬಿಡುಗಡೆಯಾದ ಅನುದಾನ (ರೂ.ಲಕ್ಷಗಳಲ್ಲಿ) |
| 1. | 2018-19 | 85.31 |
| 2. | 2019-20 | 101.00 |
| 3. | 2020-21 | 153.68 |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಆ | ಮೇಲ್ಕಂಡ ಜಿಲ್ಲೆಗಳಲ್ಲಿ ಕಳೆದ ಮೂರು ವರ್ಷಗಳಲ್ಲಿ ವಿಕಲಚೇತನರಿಂದ ದ್ವಿಚಕ್ರ ವಾಹನಗಳಿಗಾಗಿ ಬಂದಿರುವ ಅರ್ಜಿಗಳ ಸಂಖ್ಯೆ ಎಷ್ಟು; (ವಿವರ ನೀಡುವುದು). | ಕಲಬುರಗಿ ಮತ್ತು ಯಾದಗಿರಿ ಜಿಲ್ಲೆಗಳಿಗೆ ಕಳೆದ ಮೂರು ವರ್ಷಗಳಲ್ಲಿ ವಿಕಲಚೇತನ ಫಲಾನುಭವಿಗಳಿಂದ ದ್ವಿಚಕ್ರ ವಾಹನಗಳಿಗಾಗಿ ಸ್ವೀಕೃತವಾಗಿರುವ ಅರ್ಜಿಗಳ ವಿವರ ಈ ಕೆಳಕಂಡಂತಿದೆ. |

| ಕಲಬುರಗಿ ಜಿಲ್ಲೆ | | | |
|---|---|---|---|
| ಕ್ರ. ಸಂ | ವರ್ಷ | ದ್ವಿಚಕ್ರ ವಾಹನಗಳಿಗೆ ಸ್ವೀಕೃತವಾದ ಅರ್ಜಿಗಳ ಸಂಖ್ಯೆ | ಷರಾ |
| 1. | 2018-19 | 352 | - |
| 2. | 2019-20 | 123 | - |
| 3. | 2020-21 | - | ಈ ಅವಧಿಯಲ್ಲಿ ಅರ್ಜಿಗಳನ್ನು ಆಹ್ವಾನಿಸಿರುವುದಿಲ್ಲ. ಕಾರಣವೇನೆಂದರೆ, 2018-19 ಮತ್ತು 2019-20ನೇ ಸಾಲಿನಲ್ಲಿ ಸ್ವೀಕೃತವಾದ ಅರ್ಜಿಗಳು ಹೆಚ್ಚಿನ ಸಂಖ್ಯೆಯಲ್ಲಿ ಬಾಕಿ ಉಳಿದಿದ್ದುದರಿಂದ, 2020-21ನೇ ಸಾಲಿಗೆ ಸದರಿ ಜಿಲ್ಲಾ ಆಯ್ಕೆ ಸಮಿತಿಯ |

| | | | |
|---|---|---|---|
| | | | ನಿರ್ಣಯದನ್ವಯ ಹಿಂದಿನ ಸಾಲಿನಲ್ಲಿ ಸ್ವೀಕೃತವಾದ ಅರ್ಜಿಗಳನ್ನೇ ಪರಿಗಣಿಸಲು ಕ್ರಮವಹಿಸಲಾಗಿದೆ. ಈ ಹಿನ್ನಲೆಯಲ್ಲಿ 2020-21ನೇ ಸಾಲಿನಲ್ಲಿ ಅರ್ಜಿಗಳನ್ನು ಆಹ್ವಾನಿಸಿ ಸ್ವೀಕರಿಸಿರುವುದಿಲ್ಲ. |
| | ಒಟ್ಟು | 475 | |

ಯಾದಗಿರಿ ಜಿಲ್ಲೆ

| ಕ್ರಸಂ | ವರ್ಷ | ದ್ವಿಚಕ್ರ ವಾಹನಗಳಿಗೆ ಸ್ವೀಕೃತವಾದ ಅರ್ಜಿಗಳ ಸಂಖ್ಯೆ | ಷರಾ |
|---|---|---|---|
| 1. | 2018-19 | 88 | - |
| 2. | 2019-20 | 74 | - |
| 3. | 2020-21 | 60 | - |
| | ಒಟ್ಟು | 222 | |

| | | |
|---|---|---|
| ಇ | ಇದುವರೆವಿಗೂ ವಿಲೇವಾರಿಯಾಗಿರುವ ಅರ್ಜಿಗಳ ಸಂಖ್ಯೆ ಎಷ್ಟು; ವಿಲೇವಾರಿಯಾಗದೇ ಉಳಿಯಲು ಕಾರಣವೇನು? ವಿಲೇವಾರಿಯಾಗದೆ ಉಳಿದಿರುವ ಅರ್ಜಿಗಳನ್ನು ಯಾವಾಗ ವಿಲೇವಾರಿ ಮಾಡಲಾಗುವುದು? | **ಕಲಬುರಗಿ ಜಿಲ್ಲೆಗೆ ಸಂಬಂಧಿಸಿದಂತೆ:**<br>ಇದುವರೆವಿಗೂ ವಿಲೇವಾರಿಯಾಗಿರುವ ಅರ್ಜಿಗಳ ಸಂಖ್ಯೆ: 69<br>ವಿಲೇವಾರಿಯಾಗದೇ ಉಳಿದಿರುವ ಅರ್ಜಿಗಳ ಸಂಖ್ಯೆ: 406<br><br>**ಯಾದಗಿರಿ ಜಿಲ್ಲೆಗೆ ಸಂಬಂಧಿಸಿದಂತೆ:**<br>ಇದುವರೆವಿಗೂ ವಿಲೇವಾರಿಯಾಗಿರುವ ಅರ್ಜಿಗಳ ಸಂಖ್ಯೆ: 48<br>ವಿಲೇವಾರಿಯಾಗದೇ ಉಳಿದಿರುವ ಅರ್ಜಿಗಳ ಸಂಖ್ಯೆ: 174<br><br>ವಿಲೇವಾರಿಯಾಗದೇ ಉಳಿಯಲು ಕಾರಣ:<br>ಯಂತ್ರ ಚಾಲಿತ ದ್ವಿಚಕ್ರ ವಾಹನ ಯೋಜನೆಯಡಿ ಸರ್ಕಾರದಿಂದ ಬಿಡುಗಡೆಯಾಗುವ ಅನುದಾನದ ಲಭ್ಯತೆಯ ಮೇಲೆ ಹಾಗೂ 2011ರ ಜನಗಣತಿಯ ಪ್ರಕಾರ ಜಿಲ್ಲೆಗಳ ವಿಕಲಚೇತನರ ಸಂಖ್ಯೆಗಳನ್ನು ಆಧರಿಸಿ ಇಲಾಖೆಯಿಂದ ಜಿಲ್ಲೆಗಳಿಗೆ ಗುರಿಯನ್ನು ನಿಗದಿ ಪಡಿಸಲಾಗುತ್ತದೆ.<br><br>ಇಲಾಖೆಯಿಂದ ನಿಗದಿಪಡಿಸಿದ ಗುರಿಗಿಂತ ಹೆಚ್ಚುವರಿ ಅರ್ಜಿಗಳು ಸದರಿ ಜಿಲ್ಲೆಗಳಲ್ಲಿ ಸ್ವೀಕೃತವಾದ್ದರಿಂದ ಅರ್ಜಿಗಳು ವಿಲೇವಾರಿಯಾಗದೇ ಉಳಿಯಲು ಕಾರಣವಾಗಿರುತ್ತದೆ.<br><br>ವಿಲೇವಾರಿಯಾಗದೇ ಉಳಿದಿರುವ ಅರ್ಜಿಗಳನ್ನು ಆಯಾ ವರ್ಷದ ಅನುದಾನದ ಲಭ್ಯತೆ ಹಾಗೂ ವಿಕಲಚೇತನರ ಜನ ಸಂಖ್ಯೆಯನ್ನು ಗಮನದಲ್ಲಿರಿಸಿ ಯೋಜನೆಯ ನಿಯಮಾನುಸಾರ ಅರ್ಜಿಗಳನ್ನು ಹಂತ ಹಂತವಾಗಿ ವಿಲೇವಾರಿ ಮಾಡಲು ಕ್ರಮವಹಿಸಲಾಗುವುದು. |

ಸಂಖ್ಯೆ:ಮಮಇ 202 ಪಿಹೆಚ್‌ಪಿ 2021

Halappa BA

(ಆಚಾರ್ ಹಾಲಪ್ಪ ಬಸಪ್ಪ)
ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು
ಮಕ್ಕಳ ಅಭಿವೃದ್ಧಿ, ವಿಕಲಚೇತನರ ಹಾಗೂ
ಹಿರಿಯ ನಾಗರಿಕರ ಸಬಲೀಕರಣ ಸಚಿವರು.